ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 638 |
| ಸದಸ್ಯರ ಹೆಸರು | : | ಶ್ರೀ ಐವನ್ ಡಿ'ಸೋಜಾ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | : | 11.03.2020. |
| ಉತ್ತರಿಸುವ ಸಚಿವರು | : | ಉಪಮುಖ್ಯಮಂತ್ರಿ<br>ಲೋಕೋಪಯೋಗಿ ಮತ್ತು<br>ಸಮಾಜ ಕಲ್ಯಾಣ ಇಲಾಖೆ |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| (ಅ) | ರಾಷ್ಟ್ರೀಯ ಹೆದ್ದಾರಿ 66ರ ಬೈಂದೂರು – ತಲಪಾಡಿ, ಹೆದ್ದಾರಿ ಕಾಮಗಾರಿಗಳು ಪೂರ್ಣಗೊಳ್ಳುವುದು ಯಾವಾಗ; ಕಾಮಗಾರಿ ಪೂರ್ಣಗೊಳ್ಳುವ ವರ್ಷ ಯಾವುದು; ನಿಗದಿಗೊಳಿಸಿದ ಸಮಯ ಎಷ್ಟು; (ವಿವರ ನೀಡುವುದು) | ರಾಷ್ಟ್ರೀಯ ಹೆದ್ದಾರಿ 66ರ ಕುಂದಾಪುರ – ತಲಪಾಡಿ ವರೆಗೆ ಚತುಷ್ಪಥ ರಸ್ತೆಯ ಯೋಜನೆಯಡಿಯಲ್ಲಿ ಕುಂದಾಪುರದಿಂದ ಸೂರತ್ಕಲ್ ವರೆಗೆ ಕಾಮಗಾರಿಯು ಮಾರ್ಚ್ 2020ಕ್ಕೆ ಹಾಗೂ ಗೋವಾ/ ಕರ್ನಾಟಕ ಗಡಿಯಿಂದ ಕುಂದಾಪುರ ವಿಭಾಗದ ಬೈಂದೂರು – ಕುಂದಾಪುರ ವರೆಗೆ ಚತುಷ್ಪಥ ರಸ್ತೆಯ ಕಾಮಗಾರಿಯು ಡಿಸೆಂಬರ್ 2020 ಕ್ಕೆ ಮುಕ್ತಾಯವಾಗುವುದು. |
| (ಆ) | ರಾಷ್ಟ್ರೀಯ ಹೆದ್ದಾರಿ 66 ರಲ್ಲಿ ಎಷ್ಟು ಫ್ಲೈಓವರಗಳು ರಚನೆಗೊಳ್ಳಲಿದೆ; ಪೂರ್ಣಗೊಂಡ ಫ್ಲೈಓವರ್ ಗಳಾವುವು; (ವಿವರ ನೀಡುವುದು) | ರಾಷ್ಟ್ರೀಯ ಹೆದ್ದಾರಿ 66 ರಲ್ಲಿ 7 ಫ್ಲೈಓವರ್‌ಗಳ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ.<br>ವಿವರಗಳು ಕೆಳಗಿನಂತಿದೆ ಎಂದು ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರು ತಿಳಿಸಿರುತ್ತಾರೆ.<br>(1) ತೊಕ್ಕಟ್ಟು ಫ್ಲೈಓವರ್ (2) ಪಂಪ್ ವೆಲ್ ಫ್ಲೈಓವರ್<br>(3) ಕುಂಟಿಕಾನ ಫ್ಲೈಓವರ್ (4) ಕೂಲೂರು ಫ್ಲೈಓವರ್<br>(5) ಕೊಟ್ಟಾರ ಫ್ಲೈಓವರ್ (6) ಸೂರತ್ಕಲ್ ಫ್ಲೈಓವರ್<br>(7) ಕುಂದಾಪುರ ಫ್ಲೈಓವರ್ (ಕಾಮಗಾರಿ ಪ್ರಗತಿಯಲ್ಲಿದೆ) |
| (ಇ) | ಪಂಪ್‌ವೆಲ್ ಫ್ಲೈಓವರ್ ಪೂರ್ಣಗೊಂಡಿದೆಯೇ; ಈ ಕಾಮಗಾರಿ ಯಾವಾಗ ಪ್ರಾರಂಭಗೊಂಡಿತ್ತು; ವಿವರ ನೀಡುವುದು; ಈ ಫ್ಲೈಓವರ್ ಅವೈಜ್ಞಾನಿಕವಾಗಿ ನಿರ್ಮಾಣಗೊಂಡಿದ್ದು, ಅಪಘಾತಗಳು ಸಂಭವಿಸುತ್ತಿರುವ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಪೂರ್ಣಗೊಂಡಿದೆ.<br>ಪಂಪ್‌ವೆಲ್ ಫ್ಲೈಓವರ್ 2014 ರಲ್ಲಿ ಪ್ರಾರಂಭಗೊಂಡಿರುತ್ತದೆ. ಈ ಫ್ಲೈಓವರ್ ವೈಜ್ಞಾನಿಕವಾಗಿ ನಿರ್ಮಾಣಗೊಂಡಿದ್ದು, ಯಾವುದೇ ಅಪಘಾತಗಳು ಸಂಭವಿಸಿರುವುದಿಲ್ಲ. |
| (ಈ) | ಹೆದ್ದಾರಿ 66ರ ಕಾಮಗಾರಿ ಯಾವ ಗುತ್ತಿಗೆದಾರರಿಗೆ ಒದಗಿಸಲಾಗಿದೆ; ಕಳಪೆ ಕಾಮಗಾರಿಗಳ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಹೆದ್ದಾರಿ 66ರ ಕಾಮಗಾರಿಯನ್ನು ಮೆ: ನವಯುಗ ಇಂಜಿನಿಯರಿಂಗ್ ಕಂಪನಿ, ಹೈದ್ರಾಬಾದ್ ಹಾಗೂ ಮೆ: ಐ.ಆರ್.ಬಿ. ಇನ್‌ಫ್ರಾಸ್ಟ್ರಕ್ಚರ್ ಡೆವಲಪರ್ಸ್ ಲಿ. ಮುಂಬೈ ರವರಿಗೆ ವಹಿಸಲಾಗಿದೆ. ಸದರಿ ಕಾಮಗಾರಿಯು ಪ್ರತ್ಯೇಕ ಇಂಜಿನಿಯರ್ ರವರ ಮೇಲು ಉಸ್ತುವಾರಿಯಲ್ಲಿದ್ದು, ರಿಯಾಯಿತಿ ಕರಾರಿನ ಪ್ರಕಾರ ಕಾಲಕಾಲಕ್ಕೆ ಪರೀಕ್ಷೆ ಮಾಡಲಾಗುತ್ತಿರುತ್ತದೆ. ಕಳಪೆ ಕಾಮಗಾರಿಯ ಬಗ್ಗೆ ಸರ್ಕಾರದ ಗಮನಕ್ಕೆ ಯಾವುದೇ ದೂರು ಬಂದಿರುವುದಿಲ್ಲ. |

ಕಡತ ಸಂಖ್ಯೆ: ಲೋಇ 57 ಸಿಎನ್‌ಹೆಚ್ 2020 (ಇ)

(ಗೋವಿಂದ.ಎಂ.ಕಾರಜೋಳ)
ಉಪ ಮುಖ್ಯಮಂತ್ರಿ
ಲೋಕೋಪಯೋಗಿ ಮತ್ತು
ಸಮಾಜ ಕಲ್ಯಾಣ ಇಲಾಖೆ